

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 04-03-2021 ಪ್ರಶ್ನೆ ಸಂಖ್ಯೆ : 560 (671)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 04-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಬಿ.ಡಿ.ಎ ವ್ಯಾಪ್ತಿಯಲ್ಲಿ ಕಳೆದ 5 ವರ್ಷಗಳಲ್ಲಿ ನಿರ್ಮಾಣವಾದ ಬಡಾವಣೆಗಳ ಕುರಿತು

(ಅ) ಬಿಡಿಎ ವ್ಯಾಪ್ತಿಯಲ್ಲಿ (ಬಿಡಿಎ ವ್ಯಾಪ್ತಿ ಪ್ರದೇಶ ಮತ್ತು ಬಿ.ಬಿ.ಎಂ.ಪಿ. ವ್ಯಾಪ್ತಿ ಪ್ರದೇಶ ಒಳಗೊಂಡಂತೆ) ಕಳೆದ 5 ವರ್ಷಗಳಲ್ಲಿ ಎಷ್ಟು ಖಾಸಗಿ ಬಡಾವಣೆಗಳನ್ನು ನಿರ್ಮಾಣ ಮಾಡುವುದಕ್ಕೆ ಅನುಮತಿ ನೀಡಲಾಗಿದೆ; ಅನುಮತಿ ಪಡೆಯದೆ ನಿರ್ಮಾಣಗೊಂಡ ಬಡಾವಣೆಗಳ ಸಂಖ್ಯೆ ಎಷ್ಟು; (ಪ್ರತ್ಯೇಕ ವಿವರ ನೀಡುವುದು)

(ಆ) ಬಿಡಿಎ ಅನುಮತಿ ಕೊಟ್ಟ ಬಡಾವಣೆಗಳಲ್ಲಿ ಮೂಲಭೂತ ಸೌಕರ್ಯ ಕಲ್ಪಿಸಲು ಬಿಡಿಎ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು)

(ಇ) ಅನುಮತಿ ಪಡೆಯದೆ ನಿರ್ಮಾಣಗೊಂಡ ಅನಧಿಕೃತ ಖಾಸಗಿ ಬಡಾವಣೆಗಳಲ್ಲಿ cdp/rcdp ಮತ್ತು Master Plan ನ ಪ್ರಕಾರ Arterial ಮತ್ತು Sub Arterial ರಸ್ತೆಗಳನ್ನು ನಿರ್ಮಾಣ ಮಾಡಲಾಗಿದೆಯೇ; ಮತ್ತು ಮುಖ್ಯ ರಸ್ತೆಗಳಿಗೆ ಸಂಪರ್ಕ ಕಲ್ಪಿಸಲಾಗಿದೆಯೇ; (ವಿವರ ನೀಡುವುದು)

(ಈ) ಅನುಮತಿ ಪಡೆಯದಿರುವ ಬಡಾವಣೆಗಳಲ್ಲಿ ನಾಗರೀಕ ಸವಲತ್ತು (Civic Amenities) ಗಳನ್ನು ಕಲ್ಪಿಸಲು ಬಿಡಿಎ ತೆಗೆದುಕೊಂಡ ಕ್ರಮವೇನು; (ವಿವರ ನೀಡುವುದು)

(ಉ) ಬಿಡಿಎ ದಿಂದ ಅನುಮತಿ ಪಡೆದ ಬಡಾವಣೆಗಳಲ್ಲಿ ಒಳಚರಂಡಿ ಸಂಸ್ಕರಣಾ ಘಟಕಗಳನ್ನು (STP) ಸ್ಥಾಪಿಸಲಾಗಿದೆಯೇ ; ಸ್ಥಾಪಿಸಿದ್ದಲ್ಲಿ, ಎಷ್ಟು ಬಡಾವಣೆಗಳಲ್ಲಿ (STP) ಸ್ಥಾಪಿಸಲಾಗಿದೆ; ಮತ್ತು (STP) ಸ್ಥಾಪಿಸಲ್ಪಡದ ಬಡಾವಣೆಗಳ ಕುರಿತು ಸರ್ಕಾರದ ನಿಲುವೇನು? (ಸಂಪೂರ್ಣ ವಿವರ ನೀಡುವುದು)